ಡಾ|| ಚನ್ನಬಸಪ್ಪ ಎಸ್. ಪಾಟೀಲ*

# ಬಳ್ಳಿಗಾವೆಯಲ್ಲಿ ಪಂಚತಂತ್ರದ ಮೂರು ಕಥಾ ಶಿಲ್ಪಗಳ ಶೋಧ

---

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಬಳ್ಳಿಗಾವೆಯ ತ್ರಿಪುರಾಂತಕೇಶ್ವರ ದೇವಾಲಯದಲ್ಲಿ ಪಂಚತಂತ್ರ ಕಥೆಗಳ ಶಿಲ್ಪಗಳಿರುವುದು ಈಗಾಗಲೇ ತಿಳಿದಿರುವ ವಿಷಯ. ಹನ್ನೊಂದನೇ ಶತಮಾನದ ಈ ದೇವಾಲಯದಲ್ಲಿ ಡಾ|| ಎಂ.ಎಚ್. ಕೃಷ್ಣರು ಕೆಳಗಿನ ಮೂರು ಕಥೆಗಳ ಶಿಲ್ಪಗಳನ್ನು ಮೈಸೂರು ಪುರಾತತ್ವ ಇಲಾಖೆಯ ವಾರ್ಷಿಕ ವರದಿಯಲ್ಲಿ ಪ್ರಕಟಿಸಿದ್ದಾರೆ.[1] ೧. ಟಗರುಗಳ ಹೋರಾಟದಲ್ಲಿ ನರಿ ೨. ಹಂಸಗಳು ಮತ್ತು ಆಮೆ ಮತ್ತು ೩. ಮಂಗ ಮತ್ತು ಮೊಸಳೆ. ಡಾ|| ಎಂ. ಶೇಷಾದ್ರಿಯವರು ಈ ಮೂರು ಕಥೆಗಳಲ್ಲದೆ ಇನ್ನೂ ಎರಡು ಕಥೆಗಳನ್ನು ಗುರುತಿಸಿ ಅವರ ಲೇಖನದಲ್ಲಿ ಪ್ರಕಟಿಸಿದ್ದಾರೆ.[2] ಅವು ೧. ಕೀಲನುರ್ಚಿದ ಕೋಡಗ ಮತ್ತು ೨. ಬ್ರಾಹ್ಮಣಿಯು ಮುಂಗುಸಿಯನ್ನು ಕೊಂದದ್ದು. ಡಾ|| ಹೆಚ್.ಆರ್. ರಘುನಾಥ ಭಟ್ಟರು ಡಾ|| ಕೃಷ್ಣರು ಗುರುತಿಸಿದ ಮೂರು ಕಥೆಗಳನ್ನು ಮಾತ್ರ ತಮ್ಮ ಪ್ರೌಢ ಪ್ರಬಂಧದಲ್ಲಿ ಉಲ್ಲೇಖಿಸಿದ್ದಾರೆ.[3] ಈ ಐದು ಕಥೆಗಳಲ್ಲದೆ ಇನ್ನೂ ಮೂರು ಕಥೆಗಳ ಶಿಲ್ಪಗಳು ಈ ದೇವಾಲಯದಲ್ಲಿರುವುದು ನನ್ನ ಗಮನಕ್ಕೆ ಬಂದಿರುವುದರಿಂದ ಅವುಗಳನ್ನು ಇಲ್ಲಿ ವಿವರಿಸುತ್ತಿದ್ದೇನೆ.

**ಅತಿ ಲೋಭಿಯಾದ ನರಿ :**

ದುರ್ಗಸಿಂಹನ ಪಂಚತಂತ್ರದಲ್ಲಿ ಈ ಕಥೆಯು ಕೆಳಗಿನಂತಿದೆ.[4] ಕಾಡಿನಲ್ಲಿ ವಾಸ ಮಾಡುತ್ತಿದ್ದ ಒಬ್ಬ ಬೇಟೆಗಾರನು ಆನೆಯನ್ನು ಕೊಂದು ನಿಂತಿರುತ್ತಾನೆ. ಆಗ ಇದ್ದಕ್ಕಿದ್ದಂತೆ ಒಂದು ಹೆಬ್ಬಾವು ಬರುತ್ತದೆ. ಬೇಟೆಗಾರನಿಗೆ ಅದರಿಂದ ತಪ್ಪಿಸಿಕೊಳ್ಳಲು ಅವಕಾಶವಿಲ್ಲದಂತಾಗಿ ವಿಷಪೂರಿತ ಬಾಣವನ್ನು ಅದರ ಮೇಲೆ ಪ್ರಯೋಗಿಸುತ್ತಾನೆ. ಹೆಬ್ಬಾವು ತಾನು ಸಾಯುವ ಮುನ್ನ ಬೇಟೆಗಾರನನ್ನು ಕೊಲ್ಲುತ್ತದೆ. ಬಹಳ ದಿನಗಳಿಂದ ಆಹಾರವನ್ನೇ ಕಾಣದ ನರಿಯೊಂದು ಅಲ್ಲಿಗೆ ಆಹಾರ ಹುಡುಕುತ್ತಾ ಬಂದು ಮೂರು ಶವಗಳು ಬಿದ್ದಿರುವುದನ್ನು ಕಂಡು ಸಂತೋಷಗೊಂಡು ಆನೆಯ ಮಾಂಸವನ್ನು ಆರು ತಿಂಗಳವರೆಗೆ, ಹೆಬ್ಬಾವಿನ ಮಾಂಸ

---

* ಉಪನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಅರಮನೆ ಆವರಣ, ಮೈಸೂರು-೫೭೦ ೦೦೧.

1 ಕೃಷ್ಣ ಎಂ.ಹೆಚ್., ೧೯೩೨, ಆ್ಯನುವಲ್ ರಿಪೋರ್ಟ್ ಆಫ್ ದಿ ಮೈಸರು ಅರ್ಕಿಯಾಲಜಿಕಲ್ ಡಿಪಾರ್ಟಮೆಂಟ್ ಫಾರ್ ದಿ ಇಯರ್ ೧೯೩೧, ಪು. ೫೮-೬೨.

2 ಶೇಷಾದ್ರಿ ಎಂ., ೧೯೭೦, "ಕರ್ನಾಟಕ ಶಿಲ್ಪದಲ್ಲಿ ಪಂಚತಂತ್ರದ ಕಥೆಗಳು" ಸವಿನೆನಪು : ದಿವಂಗತ ಪ್ರೊ. ಟಿ.ಎಸ್. ವೆಂಕಣ್ಣಯ್ಯನವರ ಸ್ಮಾರಕ ಗ್ರಂಥ, ಸಂ. ಕುವೆಂಪು, ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು, ಪು. ೫೮೧-೫೮೪.

3 ರಘುನಾಥ ಭಟ್ ಹೆಚ್.ಆರ್. ಬಳ್ಳಿಗಾವೆ-ಇಟ್ಸ್ ಹಿಸ್ಟರಿ ಆ್ಯಂಡ್ ಆ್ಯಂಟಿಕ್ವಿಟೀಸ್, ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರೌಢ ಪ ಬಂಧ, ಪು. ೫೪೧-೫೪೨. (ಅಪ್ರಕಟಿತ)

4 ಅನಂತರಂಗಾಚಾರ್ ಎನ್., ೧೯೭೩, ದುರ್ಗಸಿಂಹ ವಿರಚಿತ ಕರ್ಣಾಟಕ ಪಂಚತಂತ್ರಂ, ಶಾರದಾ ಮಂದಿರ, ಮೈಸೂರು, ಪು. ೨೨೧-೨೨೨.

ವನ್ನು ನಾಲ್ಕು ತಿಂಗಳವರೆಗೆ ಮತ್ತು ಮನುಷ್ಯನ ಮಾಂಸವನ್ನು ಮೂರು ತಿಂಗಳವರೆಗೆ ತಿಂದು ತನ್ನ ಆಹಾರ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬಹುದೆಂದು ಯೋಚಿಸಿ ಆ ಕ್ಷಣಕ್ಕೆ ಬಿಲ್ಲಿಗೆ ಕಟ್ಟಿದ ಸ್ನಾಯುವಿನ (ಚರ್ಮದ) ದಾರವನ್ನು ತಿಂದರೆ ಸಾಕೆಂದು, ಬಿಲ್ಲಿನ ತುದಿಗೆ ಕಟ್ಟಿದ ದಾರವನ್ನು ತುಂಡರಿಸುತ್ತದೆ. ತಕ್ಷಣ ಬಾಗಿದ ಬಿಲ್ಲು ನೆಟ್ಟಗಾಗಿ ನರಿಯ ಬಾಯಿಯೊಳಗಿನಿಂದ ತಲೆಬುರುಡೆಯನ್ನು ಭೇದಿಸಿಕೊಂಡು ಹೊರಬರುತ್ತದೆ. ನರಿಯು ನೋವಿನಿಂದ ಸಾಯುತ್ತದೆ.

ಈ ಕಥೆಯನ್ನು ಸೂಚಿಸುವ ಶಿಲ್ಪದ ಹಿನ್ನೆಲೆಯಲ್ಲಿ ಬೇಟೆಗಾರನು ಕಾಡಿನಲ್ಲಿ ಸುತ್ತುತ್ತಿರುವ ಮೂರು ದೃಶ್ಯಗಳಿವೆ. ಒಂದರಲ್ಲಿ ಅವನು ಹೆಗಲಮೇಲೆ ಕೋಲನ್ನಿಟ್ಟುಕೊಂಡು ಹೋಗುತ್ತಿದ್ದಾನೆ. ಅವನು ಕೊಂದ ಮೊಲವೊಂದನ್ನು ಕೋಲಿನ ತುದಿಗೆ ನೇತು ಹಾಕಿಕೊಂಡಿದ್ದಾನೆ. ಎರಡನೇ ದೃಶ್ಯದಲ್ಲಿ ಅವನು ಕೊಳಲನ್ನು ನುಡಿಸುತ್ತಿದ್ದು ಮೂರನೇ ದೃಶ್ಯದಲ್ಲಿ ಆಯುಧವೊಂದನ್ನು ಹಿಡಿದುಕೊಂಡು ನಿಂತಿದ್ದಾನೆ. ಶಿಲ್ಪದ ಬಲಭಾಗದಲ್ಲಿ ಸತ್ತ ಆನೆಯಿದೆ. ಮಧ್ಯದಲ್ಲಿ ಬೇಟೆಗಾರ ಮತ್ತು ಹೆಬ್ಬಾವು ಸತ್ತುಬಿದ್ದಿವೆ. ಎಡಭಾಗದಲ್ಲಿದ್ದ ನರಿಯು ಬಿಲ್ಲಿನ ಒಂದು ತುದಿಗೆ ಕಟ್ಟಿದ ದಾರವನ್ನು ತುಂಡರಿಸುತ್ತಿದೆ.

ಆಂಧ್ರ ಪ್ರದೇಶದ ಮಹಬೂಬನಗರ ಜಿಲ್ಲೆಯ ಆಲಂಪುರದ ವಸ್ತು ಸಂಗ್ರಹಾಲಯದಲ್ಲಿಯ ಇಂತಹದೇ ಒಂದು ಶಿಲ್ಪದ ಮೇಲೆ ಒಂದು ಶಾಸನವಿದೆ. ಶಾಸನದ ಪಾಠ ಹೀಗಿದೆ.[5]

ಅತಿ ಲೋಭೋ ನ ಕರ್ತವ್ಯಃ ಕರ್ತ್ತವ್ಯಶ್ಚ
ಪ್ರಣಾಣತಃ |
ಅತಿ ಲೋಭೇನ ದೋಷೇಣ ಜಂಬುಕೋ
ಧನ್ವಾಪಾದಿತಃ ||

ಈ ಕಥೆಯ ನೀತಿಯನ್ನು ಬೋಧಿಸುವ ಈ ಶ್ಲೋಕದ ಅರ್ಥ : ಅತಿ ಆಸೆ ಪಡಬಾರದು. ಆಸೆಗೆ ಮಿತಿಯಿರಬೇಕು. ಅತಿ ಆಸೆಯ ದೋಷದಿಂದ ನರಿಯು ಬಿಲ್ಲಿನಿಂದ ಸತ್ತಿತು.

ಈ ಶ್ಲೋಕವು ಸಂಸ್ಕೃತ ತಂತ್ರೋಪಾಖ್ಯಾನದಲ್ಲಿರುವ ಶ್ಲೋಕವನ್ನು ಹೋಲುತ್ತದೆ.[6]

**ಬ್ರಾಹ್ಮಣ, ಏಡಿ ಮತ್ತು ಕಾಗೆ :**

ದುರ್ಗಸಿಂಹನ ಪಂಚತಂತ್ರದಲ್ಲಿ ಈ ಕಥೆಯು ಹೀಗಿದೆ.[7] ಬ್ರಾಹ್ಮಣನೊಬ್ಬನು ಒಮ್ಮೆ ತೀರ್ಥಯಾತ್ರೆಗೆ ಹೊರಡುತ್ತಾನೆ. ದಾರಿಯ ಮಧ್ಯದಲ್ಲಿ ಬತ್ತಿದ ಸರೋವರವೊಂದರಲ್ಲಿ ಒದ್ದಾಡುತ್ತಿದ್ದ ಏಡಿಯೊಂದನ್ನು ಕಂಡು, ಅದರ ಮೇಲೆ ಕನಿಕರಪಟ್ಟು ಅದರ ಜೀವವನ್ನು ಉಳಿಸಲು ಅದನ್ನು ತನ್ನ ನೀರಿನ ಪಾತ್ರೆಯಲ್ಲಿ ಹಾಕಿಕೊಂಡು ಮುಂದೆ ಹೋಗುತ್ತಾನೆ. ದಾರಿ ಮಧ್ಯದಲ್ಲಿ ಆಯಾಸಗೊಂಡು ಒಂದು ಮರದ ಕೆಳಗೆ ಮಲಗುತ್ತಾನೆ. ಆ ಮರದ ಮೇಲೆ ಒಂದು ಕಾಗೆ ಮತ್ತು ಕೆಳಗೆ ಪೊಟರೆಯಲ್ಲಿ ಒಂದು ಹಾವು ವಾಸವಾಗಿರುತ್ತವೆ. ಕಾಗೆಯು ಬ್ರಾಹ್ಮಣನ ಕಣ್ಣುಗಳನ್ನು ತಿನ್ನಬೇಕೆಂದು ಆಸೆಪಟ್ಟು ಅದನ್ನು ಹಾವಿಗೆ ತಿಳಿಸುತ್ತದೆ. ಕಾಗೆಗೆ ಸಹಾಯ ಮಾಡುವ ಉದ್ದೇಶದಿಂದ ಹಾವು ಬ್ರಾಹ್ಮಣನನ್ನು ಕಚ್ಚಿ ಸಾಯಿಸುತ್ತದೆ. ಮರದ ಮೇಲಿನಿಂದ ಹಾರಿದ ಕಾಗೆಯು ಕಣ್ಣುಗಳನ್ನು ತಿನ್ನುವುದಕ್ಕಿಂತ ಮೊದಲು ನೀರನ್ನು ಕುಡಿಯಲು ಪಾತ್ರೆಯ ಮೇಲೆ ಕುಳಿತು ತನ್ನ ಕತ್ತನ್ನು ಒಳಗೆ ಹಾಕುತ್ತದೆ. ಬ್ರಾಹ್ಮಣನ ಸಾವಿನಿಂದ ದುಃಖಿಯಾದ ಏಡಿಯು ಕಾಗೆಯ ಕತ್ತನ್ನು ತನ್ನ ಕೊಂಡಿಗಳಿಂದ ಬಲವಾಗಿ ಒತ್ತಿ ಹಿಡಿಯುತ್ತದೆ. ಏಡಿಯ ಹಿಡಿತದಿಂದ ತಪ್ಪಿಸಿಕೊಳ್ಳಲಾಗದ ಕಾಗೆಯು ಕೂಗಲಾರಂಭಿಸುತ್ತದೆ. ಕಾಗೆಯ ಕೂಗನ್ನು ಕೇಳಿದ ಹಾವು ಹತ್ತಿರ ಬಂದು ಏನು ನಡೆಯುತ್ತಿದೆ ಎಂದು ಕೇಳಿದಾಗ ಏಡಿಯು ಹಾವು ಬ್ರಾಹ್ಮಣನನ್ನು ಕೊಂದಿರುವುದರಿಂದ ತಾನು ಕಾಗೆಯನ್ನು ಕೊಲ್ಲುವುದಾಗಿ ಹೇಳಿ, ಒಂದು ವೇಳೆ ಹಾವು ತನ್ನ ವಿಷವನ್ನು ಹಿಂದಕ್ಕೆ

5 ಅಬ್ದುಲ್ ವಹೀದ್ ಖಾನ್, ೧೯೭೩, ಸ್ಟೋನ್ ಸ್ಕಲ್ಪಚರ್ಸ್ ಇನ್ ದಿ ಆಲಂಪುರ್ ಮ್ಯೂಸಿಯಂ, ಹೈದರಾಬಾದ, ಪು. ೧೧೦ ೧೧೨.

6 ಸಾಂಬಶಿವ ಶಾಸ್ತ್ರಿ ಕೆ., ೧೯೩೮, ತಂತ್ರೋಪಾಖ್ಯಾನಮ್, ತ್ರಿವೇಂದ್ರಮ್, ಪು. ೬೮

7 ಅನಂತರಂಗಾಚಾರ್, ಅದೇ, ಪು. ೨೧೯ ೨೨೦.

ಪಡೆದು ಬ್ರಾಹ್ಮಣನನ್ನು ಬದುಕಿಸಿದರೆ ತಾನು ಕಾಗೆಯನ್ನು ಬಿಡುವುದಾಗಿ ಹೇಳುತ್ತದೆ. ತಕ್ಷಣ ಹಾವು ಬ್ರಾಹ್ಮಣನ ದೇಹದಿಂದ ವಿಷವನ್ನು ಹೀರಿಕೊಂಡಾಗ ಬ್ರಾಹ್ಮಣನು ಜೀವವನ್ನು ಮರಳಿ ಪಡೆಯುತ್ತಾನೆ. ಏಡಿಯು ಕಾಗೆಯ ಕತ್ತನ್ನು ಬಿಡುತ್ತದೆ.

ಈ ಕಥೆಯನ್ನು ನಿರೂಪಿಸುವ ಶಿಲ್ಪದಲ್ಲಿ ಒಂದು ದೊಡ್ಡ ಮರವಿದೆ. ಮರದ ಕಾಂಡದ ಪೊಟರೆಯಲ್ಲಿ ಹಾವು ಹೆಡೆಯನ್ನು ಅಗಲ ಮಾಡಿಕೊಂಡು ಕುಳಿತಿದೆ. ಬ್ರಾಹ್ಮಣನು ತನ್ನ ಕೊಡೆಯನ್ನು ಮರಕ್ಕೆ ಒರಗಿಸಿಟ್ಟು ಮರದ ಕೆಳಗೆ ಮಲಗಿದ್ದಾನೆ. ಅವನ ಪಕ್ಕದಲ್ಲಿ ಪಾತ್ರೆಯೊಳಗಿರುವ ಏಡಿಯು ಕಾಗೆಯ ಕತ್ತನ್ನು ಹಿಡಿದಿದೆ. ಏಡಿಯು ಪಾತ್ರೆಯೊಳಗಿರುವುದರಿಂದ ಅದರ ಕೊಂಡಿಗಳು ಮಾತ್ರ ಮೇಲೆ ಕಾಣುತ್ತಿವೆ.

ಗುಲ್ಬರ್ಗ ಜಿಲ್ಲೆಯ ಶಹಪೂರ ತಾಲ್ಲೂಕಿನ ಸಿರಿವಾಳದಲ್ಲಿರುವ ಈಶ್ವರ ದೇವಾಲಯದ ಮೇಲಿರುವ ಇಂತಹ ಶಿಲ್ಪದೊಂದಿಗೆ ಇದೇ ಕಥೆಯ ಇನ್ನೊಂದು ದೃಶ್ಯವನ್ನು ಚಿತ್ರಿಸಲಾಗಿದೆ. ಅಲ್ಲಿ ನೆಲದ ಮೇಲಿರುವ ಏಡಿಯನ್ನು ಬ್ರಾಹ್ಮಣನು ಅದರ ಪಕ್ಕದಲ್ಲಿ ಕುಳಿತು ಅದರ ಪರಿಸ್ಥಿತಿಯನ್ನು ನೋಡುತ್ತಿದ್ದಾನೆ. ಆಲಂಪುರ ವಸ್ತು ಸಂಗ್ರಹಾಲಯದಲ್ಲಿರುವ ಶಿಲ್ಪವು ಬಳ್ಳಿಗಾವೆಯ ಶಿಲ್ಪದಂತೆಯೇ ಇದೆ. ಆದರೆ ಈ ಶಿಲ್ಪದ ಮೇಲ್ಭಾಗದಲ್ಲಿ "ಮನುಷ್ಯನ ಕರ್ತವ್ಯ" ಎಂದು ಬರೆದ ಶಾಸನವಿದೆ.[8] ಕಷ್ಟದಲ್ಲಿರುವವರಿಗೆ ಸಹಾಯ ಮಾಡುವುದು ಮನುಷ್ಯನ ಕರ್ತವ್ಯವೆಂಬ ನೀತಿಯನ್ನು ಬೋಧಿಸುವುದು ಈ ಶಿಲ್ಪ ಮತ್ತು ಶಾಸನದ ಉದ್ದೇಶ.

**ಬ್ರಾಹ್ಮಣ, ಕಳ್ಳ ಮತ್ತು ಬ್ರಹ್ಮ ರಾಕ್ಷಸ :**

ವಿಷ್ಣುಶರ್ಮನ ಪಂಚತಂತ್ರದಲ್ಲಿ ಈ ಕಥೆಯು ಹೀಗಿದೆ.[9] ಒಂದು ಊರಿನಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಅವನು ಬೇರೆಯವರು ಕೊಡುವ ದಕ್ಷಿಣೆಯಿಂದ ಜೀವನ ಸಾಗಿಸುತ್ತಿದ್ದನು. ಒಮ್ಮೆ ಯಾರೋ ಒಬ್ಬರು ಅವನಿಗೆ ಎರಡು ಹಸುವಿನ ಕರುಗಳನ್ನು ಕೊಟ್ಟರು. ಬ್ರಾಹ್ಮಣನು ಅವುಗಳಿಗೆ ಭಿಕ್ಷೆಯಲ್ಲಿ ಸಿಗುವ ತುಪ್ಪ ಬೆಣ್ಣೆ ಮುಂತಾದವುಗಳನ್ನು ತಿನ್ನಿಸಿ ಚೆನ್ನಾಗಿ ಬೆಳೆಸಿದನು. ಅವು ಬೆಳೆದು ದೊಡ್ಡವಾಗಿ ದಷ್ಟಪುಷ್ಟವಾದ ಹಸುಗಳಾದವು. ಒಂದು ದಿನ ಕಳ್ಳನೊಬ್ಬನು ಆ ಹಸುಗಳನ್ನು ಕದಿಯಬೇಕೆಂದು ಯೋಚಿಸಿ, ಹಗ್ಗವನ್ನು ತೆಗೆದುಕೊಂಡು ರಾತ್ರಿ ವೇಳೆಯಲ್ಲಿ ಬ್ರಾಹ್ಮಣನ ಮನೆಯ ಕಡೆಗೆ ಹೊರಟನು. ದಾರಿಯಲ್ಲಿ ಒಬ್ಬ ಬ್ರಹ್ಮರಾಕ್ಷಸನು ಅವನನ್ನು ನೋಡಿ ಎಲ್ಲಿಗೆ ಹೋಗುತ್ತಿದ್ದಾನೆಂದು ವಿಚಾರಿಸಿದ. ಕಳ್ಳನು ತಾನು ಬ್ರಾಹ್ಮಣನ ಹಸುಗಳನ್ನು ಕದಿಯಲು ಹೊರಟಿರುವುದನ್ನು ಹೇಳಿದ. ಆಗ ಬ್ರಹ್ಮರಾಕ್ಷಸನು ತಾನೂ ಸಹ ಅದೇ ಬ್ರಾಹ್ಮಣನನ್ನು ತಿನ್ನಲು ಹೊರಟಿರುವುದಾಗಿ ಹೇಳಿದ. ಇಬ್ಬರೂ ಒಂದೇ ಸ್ಥಳಕ್ಕೆ ಹೊರಟಿರುವುದರಿಂದ ಜೊತೆಯಲ್ಲಿಯೇ ಹೋಗಿ ಮನೆಯಲ್ಲಿ ಸುರಕ್ಷಿತವಾದ ಸ್ಥಳದಲ್ಲಿ ಬಚ್ಚಿಟ್ಟುಕೊಳ್ಳುತ್ತಾರೆ. ಒಳ್ಳೆಯ ಅವಕಾಶ ಸಿಕ್ಕಾಗ ಬ್ರಹ್ಮರಾಕ್ಷಸನು ಬ್ರಾಹ್ಮಣನನ್ನು ತಿನ್ನಲು ಹೋಗುತ್ತಾನೆ. ಆಗ ಕಳ್ಳನು ತನಗೆ ಅದರಿಂದ ತೊಂದರೆಯಾಗುತ್ತದೆ, ತಾನು ಹಸುಗಳನ್ನು ಕದ್ದುಕೊಂಡು ಹೋಗುವವರೆಗೆ ಸುಮ್ಮನಿರಬೇಕೆಂದು ಹೇಳುತ್ತಾನೆ. ಹಸುಗಳ ಶಬ್ದದಿಂದ ಬ್ರಾಹ್ಮಣನಿಗೆ ಎಚ್ಚರವಾಗಬಹುದು. ಆದುದರಿಂದ ಅವನು ಏಳುವ ಮೊದಲೇ ಅವನನ್ನು ತಾನು ತಿನ್ನುವುದಾಗಿ ಬ್ರಹ್ಮರಾಕ್ಷಸ ಹೇಳುತ್ತಾನೆ. ಹೀಗೆ ಇಬ್ಬರೂ ಜಗಳವಾಡುತ್ತಿದ್ದಾಗ ಬ್ರಾಹ್ಮಣನು ಎಚ್ಚರಗೊಂಡು ಇವರನ್ನು ನೋಡುತ್ತಾನೆ. ಆಗ ಕಳ್ಳನು ಬ್ರಹ್ಮರಾಕ್ಷಸನು ಬ್ರಾಹ್ಮಣನನ್ನು ತಿನ್ನಲು ಬಂದಿರುವನೆಂದು ಹೇಳುತ್ತಾನೆ. ಬ್ರಹ್ಮರಾಕ್ಷಸನು ಕಳ್ಳನು ಬ್ರಾಹ್ಮಣನ ಹಸುಗಳನ್ನು ಕದಿಯಲು ಬಂದಿರುವನೆಂದು ಹೇಳುತ್ತಾನೆ. ಆಗ ಬ್ರಾಹ್ಮಣನು ತನ್ನ ಇಷ್ಟದೇವತೆಯನ್ನು ಪ್ರಾರ್ಥಿಸಿ ಬ್ರಹ್ಮರಾಕ್ಷಸನಿಂದ ತನ್ನ ಪ್ರಾಣವನ್ನು ಉಳಿಸಿಕೊಂಡು ಕಳ್ಳನನ್ನು ದೊಣ್ಣೆಯಿಂದ ಓಡಿಸಿ ಹಸುಗಳನ್ನು ಕಾಪಾಡಿಕೊಳ್ಳುತ್ತಾನೆ.

ಕಥೆಯನ್ನು ನಿರೂಪಿಸುವ ಶಿಲ್ಪದ ಎಡಭಾಗದಲ್ಲಿ ಬ್ರಾಹ್ಮಣ ಮತ್ತು ಅವನ ಹೆಂಡತಿಯು ಮಂಚದ ಮೇಲೆ ಮಲಗಿದ್ದಾರೆ. ಬ್ರಾಹ್ಮಣನ ಹೆಂಡತಿಯು ತನ್ನ

8 ಅಬ್ದುಲ್‌ವಹೀದ್ ಖಾನ್, ಅದೇ, ಪು. ೧೧೩.

9 ನರಸಿಂಹಶಾಸ್ತ್ರಿ ೧೯೭೪, ಕನ್ನಡ ಪಂಚತಂತ್ರ, ಕಾವ್ಯಾಲಯ, ಮೈಸೂರು, ಪು. ೨೧೫-೨೧೬.

ಬಲಗೈಯನ್ನು ತಲೆಗೆ ಆಸರೆಯಾಗಿಟ್ಟುಕೊಂಡು ತಲೆಯನ್ನು ಸ್ವಲ್ಪ ಮೇಲಕ್ಕೆತ್ತಿದ್ದಾಳೆ. ಬ್ರಾಹ್ಮಣನು ತನ್ನ ಬಲಗೈಯನ್ನು ಹಾಸಿಗೆಯ ಮೇಲಿಟ್ಟು ಮೇಲೆ ಏಳುತ್ತಿದ್ದಾನೆ. ಅವನ ಎಡಗೈ ಬಾಯಿಯ ಹತ್ತಿರವಿದ್ದು ಕಳ್ಳ ಮತ್ತು ಬ್ರಹ್ಮರಾಕ್ಷಸ ಒಳಗೆ ನುಗ್ಗಿದ್ದನ್ನು ನೋಡಿ ಭಯವನ್ನು ವ್ಯಕ್ತಪಡಿಸುತ್ತಿದ್ದಾನೆ. ದಂಪತಿಗಳಿಬ್ಬರೂ ಆಗಂತುಕರೆಡೆಗೆ ನೋಡುತ್ತಿದ್ದಾರೆ. ಬ್ರಹ್ಮರಾಕ್ಷಸನು ಎಡಗೈಯಲ್ಲಿ ಖಡ್ಗ ಮತ್ತು ಮೇಲಕ್ಕೆತ್ತಿರುವ ಬಲಗೈಯಲ್ಲಿ ಇನ್ನೊಂದು ಆಯುಧವನ್ನು ಹಿಡಿದು ದಂಪತಿಗಳ ಕಡೆಗೆ ನುಗ್ಗುತ್ತಿದ್ದಾನೆ. ಕಳ್ಳನು ಹಸುವಿನ ಹತ್ತಿರ ನಿಂತಿದ್ದು ಎಡಗೈಯಲ್ಲಿ ಕೋಲನ್ನು ಹಿಡಿದು, ಬಲಗೈಯನ್ನು ಮೇಲಕ್ಕೆತಿ ಬ್ರಹ್ಮರಾಕ್ಷಸನಿಗೆ ಮುಂದೆ ಹೋಗಬೇಡವೆಂದು ಹೇಳುತ್ತಿದ್ದಾನೆ.

ಈ ಶಿಲ್ಪವು ಬೋಧಿಸುವ ನೀತಿ ; ಶತ್ರುಗಳು ಪರಸ್ಪರ ಜಗಳವಾಡಿದರೆ ನಮಗೇ ಹಿತ. ಕಳ್ಳನು ಪ್ರಾಣವನ್ನು ಉಳಿಸಿದ. ರಾಕ್ಷಸನು ಗೋವುಗಳನ್ನು ಉಳಿಸಿದ.

[ಶಾಸನಗಳ ಪಡಿಯಚ್ಚುಗಳನ್ನು ನೀಡಿ ಅವುಗಳ ಪಾಠವನ್ನು ಓದಲು ನೆರವು ನೀಡಿದ ಭಾರತೀಯ ಪುರಾತತ್ವ ಸರ್ವೇಕ್ಷಣೆಯ ಶಾಸನ ವಿಭಾಗದ ನಿರ್ದೇಶಕರಾದ ಶ್ರೀ ಎಮ್. ಎನ್. ಕಟ್ಟಿಯವರಿಗೆ ನನ್ನ ಕೃತಜ್ಞತೆಗಳು.]

10 ಕರ್ನಾಟಕದಲ್ಲಿ ಪಂಚತಂತ್ರದ ೨೬ ಕತೆಗಳನ್ನು ನಿರೂಪಿಸುವ ಸುಮಾರು ೧೦೦ ಶಿಲ್ಪಗಳು ಪತ್ತೆಯಾಗಿವೆ. ಇವುಗಳ ಸಮಗ್ರ ವಿವರಣೆಗಳನ್ನೊಳಗೊಂಡ ಗ್ರಂಥವನ್ನು ಅಚ್ಚಿಗಾಗಿ ಸಿದ್ಧಪಡಿಸುತ್ತಿದ್ದೇನೆ.